**ಇಂಗ್ಲಿಷ್ ಭಾಷೆಯಲ್ಲಿ ಬಲವರ್ಧಕವಾಗಿ ಸಂಗೀತದ ಬಳಕೆ**

**ದೀಪಿಕಾ ಝಾಲಾ**

ಸಂಗೀತವು ನಮ್ಮ ಭಾವನೆಗಳನ್ನು ಕಲಕುವ ಶಕ್ತಿಯನ್ನು ಹೊಂದಿದೆ. ನಾವು ಆಗಾಗ್ಗೆ ಹಾಡುಗಳು, ಪ್ರಾಸಗಳನ್ನು ಮಕ್ಕಳು ಹಾಡುವುದನ್ನು ಅಥವಾ ಗುನುಗುವನ್ನು ಮತ್ತು ಕೆಲವೊಮ್ಮೆ ಕೆಲವೊಂದು ಪರಿಚಿತ ಧ್ವನಿಗಳನ್ನು ಗುನುಗುವುದನ್ನು ಕಾಣುತ್ತೇವೆ. ಮೊದಲನೆಯದಾಗಿ, ಇಲ್ಲಿ ಸಿರೋಹಿಯಲ್ಲಿ ಮಕ್ಕಳಿಗೆ ಇಂಗ್ಲಿಷ್ ಭಾಷೆಯ ವಾತಾವರಣವು ಹೆಚ್ಚೇನೂ ಲಭಿಸುವುದಿಲ್ಲ. ಎರಡನೆಯದಾಗಿ, ಇದು ಅವರ ಮೂರನೇ ಭಾಷೆಯಾಗಿದೆ. ವಿದ್ಯಾರ್ಥಿಗಳಿಗೆ ಕೆಲವೊಂದು ಪದಗಳು, ನುಡಿಗಟ್ಟುಗಳು ಮತ್ತು ವಾಕ್ಯಗಳನ್ನು ಅರಿತುಕೊಳ್ಳಲು ಅಥವಾ ಸ್ಪಷ್ಟವಾಗಿ ಉಚ್ಚರಿಸಲು ಸಹ ಕಷ್ಟಕರವೆನಿಸುತ್ತದೆ. ಹೀಗಾಗಿ, ಅವರ ಕಲಿಕೆಯ ಬಲವರ್ಧನೆಗಾಗಿ ಪ್ರತಿದಿನವೂ ಪ್ರಾಸ ಪದ್ಯಗಳ ಜೊತೆಗೆ ಮುಂದೆ ಸಾಗುವುದು ಅಗತ್ಯವೆನಿಸುತ್ತದೆ. ಸಂಗೀತವು ಲಯ ಮತ್ತು ಮಾಧುರ್ಯವನ್ನು ಹೊಂದಿದ್ದು, ಇದು ವಿದ್ಯಾರ್ಥಿಗಳಿಗೆ ಭಾಷೆಯಲ್ಲಿ ನಿರರ್ಗಳತೆಯನ್ನು ಅಭಿವೃದ್ಧಿಪಡಿಸಲು ಸಹಾಯ ಮಾಡುತ್ತದೆ. ಪ್ರಾಸಗಳನ್ನು ಅಭಿನಯ ಮತ್ತು ಹಾವಭಾವಗಳೊಂದಿಗೆ ಹಾಡಿದಾಗ ಮಕ್ಕಳಿಗೆ ಇಂಗ್ಲಿಷ್ ಪದಗಳು ಮತ್ತು ಅಭಿವ್ಯಕ್ತಿಗಳ ಅರ್ಥಗಳನ್ನು ಗ್ರಹಿಸಲು ಸಾಧ್ಯವಾಗುತ್ತದೆ.

ಯಾವುದೇ ಭಾಷೆಯು ನಾಲ್ಕು ಕೌಶಲ್ಯಗಳನ್ನು ಹೊಂದಿರುತ್ತದೆ. ಅವೆಂದರೆ ಕೇಳುವುದು, ಮಾತನಾಡುವುದು, ಓದುವುದು ಮತ್ತು ಬರೆಯುವುದು (ಇವುಗಳನ್ನು ಎಲ್.ಎಸ್.ಆರ್.ಡಬ್ಲ್ಯೂ ಎಂದು ಸಂಕ್ಷಿಪ್ತವಾಗಿ ಕರೆಯಲಾಗುತ್ತದೆ). ಭಾಷೆಯನ್ನು ಗ್ರಹಿಸಲು ಮತ್ತು ನಿರರ್ಗಳತೆಯನ್ನು ಸಾಧಿಸಲು ವಿದ್ಯಾರ್ಥಿಗಳು ಈ ನಾಲ್ಕು ಕೌಶಲ್ಯಗಳನ್ನು ಅಭ್ಯಸಿಸಬೇಕಾಗುತ್ತದೆ. ತರಗತಿಯಲ್ಲಿ ನಾವು ಪ್ರಾಸ ಪದ್ಯಗಳನ್ನು ಕಲಿಸುವಾಗ ಮಕ್ಕಳು ಈ ಎಲ್ಲಾ ಕೌಶಲ್ಯಗಳನ್ನು ಬಳಸುತ್ತಾರೆ. ಇದು ಅವರಿಗೆ ಅನೇಕ ಪದಗಳನ್ನು ಗುರುತಿಸಲು ಸಹಾಯ ಮಾಡುತ್ತದೆ. ಇದು ಕಲಿಕೆಯ ಪ್ರಕ್ರಿಯೆಯನ್ನು ಸುಗಮಗೊಳಿಸುತ್ತದೆ. ಇಂಗ್ಲಿಷ್ ಭಾಷೆಯ ವಿಚಾರ ಬಂದಾಗ, ಈ ಪದಗಳನ್ನು ನಾವು ನಂತರ ಕಥೆಗಳು ಮತ್ತು ಲೇಖನಗಳಲ್ಲಿ ಬಳಸುವ ಕಾರಣ ವಿದ್ಯಾರ್ಥಿಗಳಿಗೆ ಇವು ಕಷ್ಟಕರವೆನಿಸುವುದಿಲ್ಲ. ಅವರು ಪಠ್ಯದ ಭಾಗಗಳನ್ನು ತಾವಾಗಿಯೇ ಅರಿತುಕೊಳ್ಳುತ್ತಾರೆ.

**ತರಗತಿಯ ಅನುಭವಗಳು**

ಎನ್.ಸಿ.ಇ.ಆರ್.ಟಿ ಪಠ್ಯಪುಸ್ತಕದಲ್ಲಿ 'ಬರ್ಡ್ ಟಾಕ್' ಎನ್ನುವ ಕವಿತೆಯು ಇರುವ ಕಾರಣ ಮೂರನೇ ತರಗತಿಯ ವಿದ್ಯಾರ್ಥಿಗಳಿಗಾಗಿ ನಾವು 'ಹಕ್ಕಿ' ಎನ್ನುವ ವಿಷಯದ ಕುರಿತು ಚರ್ಚಿಸುತ್ತಿದ್ದೆವು. ಪ್ರಾಸ ಪದ್ಯಗಳನ್ನು ಮಕ್ಕಳು ಚೆನ್ನಾಗಿ ಅರಿತುಕೊಳ್ಳುವಂತಾಗಲು ನಮ್ಮ ಸಂಗೀತ ಶಿಕ್ಷಕರನ್ನು ನಾವು ಆಹ್ವಾನಿಸಿದೆವು. ಈ ಕವಿತೆಯೊಂದಿಗೆ ನಾವು ಹಾಡೊಂದನ್ನು ರಚಿಸಿದೆವು. ಈ ಪ್ರಾಸ ಪದ್ಯವನ್ನು ವಿದ್ಯಾರ್ಥಿಗಳು ಆನಂದಿಸಿದರು. ಅವರು ಇದರೊಂದಿಗೆ ನರ್ತಿಸಿದರು ಮಾತ್ರವಲ್ಲದೆ ಇದರ ರಾಗವನ್ನು ಇಡೀ ದಿನ ಗುನುಗಿದರು. ಅವರು ಹಾಡಿನ ಅಭಿನಯ ಮತ್ತು ಹಾವಭಾವವನ್ನು ಕಲಿತುಕೊಂಡರು. ಎಲ್ಲಾ ವಿದ್ಯಾರ್ಥಿಗಳ ಸಂಪೂರ್ಣ ಪಾಲ್ಗೊಳ್ಳುವಿಕೆಯೊಂದಿಗೆ ಅಭಿನಯ ಮತ್ತು ಹಾವಭಾವದ ಮೂಲಕ ಪ್ರಾಸ ಪದ್ಯಗಳ ಗಾಯನದ ಕಲಿಕಾ ಫಲಿತಾಂಶವನ್ನು ಪಡೆಯಲಾಯಿತು. ಪ್ರತಿಯೊಬ್ಬರೂ ಸಹ ಪ್ರಾಸ ಪದ್ಯವನ್ನು ಹಾಡಿದರು ಮಾತ್ರವಲ್ಲದೆ, ನಾವು ಹೇಳುವ ಮೊದಲೇ, ತಮ್ಮ ಪಠ್ಯಪುಸ್ತಕಗಳಲ್ಲಿರುವ ಚಿತ್ರಗಳಲ್ಲಿದ್ದ ರಾಬಿನ್ ಮತ್ತು ಜೇ ಎನ್ನುವ ಹಕ್ಕಿಗಳನ್ನು ಗುರುತಿಸಿದರು. ಈ ಪ್ರಾಸ ಪದ್ಯದಲ್ಲಿ ಅಭಿವೃದ್ಧಿಪಡಿಸಲಾದ ಪದ ಪಟ್ಟಿಯು, 'ನೀನಾ ಅಂಡ್ ದ ಬೇಬಿ ಸ್ಪ್ಯಾರೊ' ಎಂಬ ಅಧ್ಯಾಯದಲ್ಲೂ ನಮಗೆ ಸಹಾಯ ಮಾಡಿತು. ಅತ್ಯಲ್ಪ ಸಹಾಯದೊಂದಿಗೆ ಪಠ್ಯವನ್ನು ಅರಿತುಕೊಳ್ಳಲು ವಿದ್ಯಾರ್ಥಿಗಳಿಗೆ ಸಾಧ್ಯವಾಯಿತು.

ಈ ಪ್ರಾಸ ಪದ್ಯವನ್ನು ಅಭಿನಯದೊಂದಿಗೆ ಶಾಲಾ ಸಭೆಯಲ್ಲಿ ಹಾಡಿದಾಗ, ಎಲ್ಲಾ ತರಗತಿಗಳ ವಿದ್ಯಾರ್ಥಿಗಳು ಒಟ್ಟಿಗೆ ಹಾಡಲು ಪ್ರಾರಂಭಿಸಿದರು. ನಂತರ ಅವರು ಶಾಲೆಯ ಕಾರಿಡಾರುಗಳು, ಆಟದ ಮೈದಾನ, ತಮ್ಮ ತರಗತಿ ಹಾಗೂ ಮನೆಗಳಲ್ಲೂ ಸಹ ಈ ಪ್ರಾಸ ಪದ್ಯವನ್ನು ಹಾಡಿದರು. ನಾವು ತರಗತಿಯಲ್ಲಿ ಈ ಪ್ರಾಸ ಪದ್ಯದ ಚಾರ್ಟುಗಳನ್ನು ಅಂಟಿಸಿದೆವು. ತಮಗೆ ಸಮಯ ಸಿಕ್ಕಾಗಲೆಲ್ಲ ವಿದ್ಯಾರ್ಥಿಗಳು ಅದನ್ನು ನೋಡಿ ಓದಬಹುದಾಗಿತ್ತು.

| |
|---|
| ಚಿತ್ರ 1. ಐದನೇ ತರಗತಿಯ ವಿದ್ಯಾರ್ಥಿಗಳು ಹಾಡುತ್ತಿರುವುದು ಮತ್ತು ನರ್ತಿಸುತ್ತಿರುವುದು |

ನಂತರ ನಾವು ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ತರಗತಿಗಳಿಗಾಗಿ ಒಂದೂವರೆ ಗಂಟೆಯ ಕ್ಲಾಸನ್ನು ಒಟ್ಟಿಗೆ ನಡೆಸಲು ಆರಂಭಿಸಿದೆವು. ಆದರೆ ಮಕ್ಕಳಿಗೆ ಬೋರು ಹೊಡೆಯುತ್ತಿರುವುದು ಮತ್ತು ಆಗಾಗ್ಗೆ ಅವರು ಆಸಕ್ತಿ ಕಳೆದುಕೊಳ್ಳುವುದನ್ನು ನಾವು ಗಮನಿಸಿದೆವು. ಹೀಗಾಗಿ, ಅವರ ಗಮನವನ್ನು ತರಗತಿಯತ್ತ ಮತ್ತೆ ಸೆಳೆಯುವುದಕ್ಕಾಗಿ ನಾವು ಅಭಿನಯದಿಂದ ಕೂಡಿದ ಪ್ರಾಸ ಪದ್ಯವನ್ನು ಪರಿಚಯಿಸಿದೆವು. 'I am alive, awake alert, enthusiastic' ಎಂಬ ಪ್ರಾಸ ಪದ್ಯವನ್ನು ಎಲ್ಲಾ ಮಕ್ಕಳು ಆನಂದಿಸಿದರು. 'Enthusiastic' ಎಂಬ ಪದಕ್ಕೆ ಸಂಬಂಧಿಸಿದಂತೆ ಅವರು ವಿವಿಧ ಭಂಗಿಗಳನ್ನು ಪ್ರದರ್ಶಿಸಿದರು. ಆರಂಭದಲ್ಲಿ ಈ ಪದಗಳನ್ನು ಪುನರಾವರ್ತಿಸುವುದು ಅವರಿಗೆ ಕಷ್ಟಕರವೆನಿಸಿತು. ಆದರೆ ನಿಧಾನವಾಗಿ ಅವರು ಅದನ್ನು ಸಾಧಿಸಿದರು. ವಿದ್ಯಾರ್ಥಿಗಳ ಶಕ್ತಿಯ ಮಟ್ಟದಲ್ಲಿ ಕುಸಿತವನ್ನು ಗಮನಿಸಿದಾಗಲೆಲ್ಲ, ಅವರು ನಿಂತುಕೊಂಡು ಈ ಪ್ರಾಸ ಪದ್ಯವನ್ನು ಅಭಿನಯದೊಂದಿಗೆ ಹಾಡಲು ಅವರಿಗೆ ಹೇಳಿದೆವು. ಈ ಪ್ರಾಸ ಪದ್ಯದ ಮೂಲಕ, ನಮ್ಮ ಮುಂದಿರುವ ಕಾರ್ಯವನ್ನು ಪೂರ್ಣಗೊಳಿಸುವುದಕ್ಕಾಗಿ ತರಗತಿಯತ್ತ ಅವರ ಗಮನವನ್ನು ಮತ್ತೆ ಸೆಳೆಯುವುದಕ್ಕಾಗಿ ಸಾಧ್ಯವಾಗುತ್ತಿತ್ತು. ಈ ಪ್ರಾಸ ಪದ್ಯವನ್ನು ನಂತರ ಮಕ್ಕಳು ವಿವಿಧ ರೂಪಗಳಿಗೆ ರೂಪಾಂತರಿಸಿದರು ಹಾಗೂ ಈ ಪದಗಳ ಮೂಲಕ ಪರಸ್ಪರ ಸಂವಾದ ನಡೆಸುವುದನ್ನು ಆನಂದಿಸಿದರು. ಅಲ್ಲದೆ ಶಬ್ದ ಭಂಡಾರವನ್ನು ರೂಪಿಸಲು ಮತ್ತು ನಿರರ್ಗಳವಾಗಿ ಮಾತನಾಡಲು ಇದು ಅವರಿಗೆ ಸಹಾಯ ಮಾಡಿತು.

**ಉನ್ನತ ಗುಣಮಟ್ಟದ ಕೌಶಲ್ಯಗಳನ್ನು ರೂಪಿಸುವುದು**

ಬ್ಲೂಮ್ ಅವರ ಜೀವಿವರ್ಗೀಕರಣ ಶಾಸ್ತ್ರದ ಪ್ರಕಾರ, ಏನಾದರೂ ಹೊಸತನ್ನು ರೂಪಿಸುವುದು ಎಂದರೆ ಅದು ಉನ್ನತ ಗುಣಮಟ್ಟದ ಕೌಶಲ್ಯ ಪಡೆಯುವುದು ಎಂದರ್ಥ. ವಿದ್ಯಾರ್ಥಿಗಳು ಗುಂಪಿನಲ್ಲಿ ಮತ್ತು ವೈಯಕ್ತಿಕವಾಗಿ ಕವಿತೆಗಳನ್ನು ರಚಿಸುವುದನ್ನು ಇಷ್ಟಪಡುತ್ತಾರೆ. ಕವಿತೆಯೊಂದಕ್ಕೆ ಸಾಲುಗಳನ್ನು ಸೇರಿಸಲು ಅವರಿಗೆ ನಾವು ಹೇಳಿದಾಗ, ಕೆಲವೊಂದು ಅದ್ಭುತ ಪದಗಳೊಂದಿಗೆ ಬೇರೆ ಬೇರೆ ಪ್ರಕಾರಗಳ ಪ್ರಾಸ ಪದ್ಯಗಳನ್ನು ನಾವು ಪಡೆಯುತ್ತೇವೆ. ಈ ಪ್ರಾಸ ಪದ್ಯಗಳನ್ನು ಹಾಡುವುದನ್ನು ಅವರು ಆನಂದಿಸುತ್ತಾರೆ ಮಾತ್ರವಲ್ಲದೆ ಈ ಪ್ರಾಸ ಪದ್ಯಗಳೊಂದಿಗೆ ವಿವಿಧ ಮಾದರಿಗಳನ್ನು ರಚಿಸುವುದನ್ನು ಮತ್ತು ಇಡೀ ತರಗತಿಯು ಒಟ್ಟಾಗಿ ಹಾಡುವುದನ್ನು ಇಷ್ಟಪಡುತ್ತಾರೆ. ಇದು ಭಾಷೆಯಲ್ಲಿ ಅವರಿಗೆ ಆತ್ಮವಿಶ್ವಾಸವನ್ನು ಮೂಡಿಸುತ್ತದೆ. ಅಲ್ಲದೆ ಅದರಲ್ಲಿ ಮಾತನಾಡಲು ಅವರು ಹಿಂಜರಿಯುವುದಿಲ್ಲ. ಇದು ತರಗತಿಯಲ್ಲಿ ವಿವಿಧ ರೀತಿಯ ಪದ್ಯಗಳನ್ನು ಅವರಿಗೆ ಓದಲು ನೀಡಲು ಮತ್ತು ಪರಸ್ಪರ ಹಂಚಿಕೊಳ್ಳಲು ಶಿಕ್ಷಕರಾದ ನಮಗೆ ನೆರವಾಗುತ್ತದೆ.

ತರಗತಿಯಲ್ಲಿ ನಾವು ನಡೆಸುವ ಒಂದು ಚಟುವಟಿಕೆ ಎಂದರೆ 'ಕೇಳುವುದು ಮತ್ತು ಬರೆಯುವುದು.' ವಿದ್ಯಾರ್ಥಿಗಳು ಒಂದು ಕವಿತೆಯನ್ನು ನಾಲ್ಕರಿಂದ ಐದು ಬಾರಿ ಕೇಳುತ್ತಾರೆ. ನಂತರ ಈ ಕವಿತೆಯಿಂದ ಎಷ್ಟು ಸಾಧ್ಯವೋ ಅಷ್ಟು ಪದಗಳನ್ನು ನೆನಪಿಟ್ಟುಕೊಂಡು ಬರೆಯಲು ನಾವು ಅವರಿಗೆ ಹೇಳುತ್ತೇವೆ. ಈ ಕವಿತೆಯನ್ನು ಕೇಳಿ, ಆನಂದಿಸಿದಾಗ ಅವರು ಎರಡು ಅಥವಾ ಮೂರು ಪಟ್ಟು ಹೆಚ್ಚಿನ ಪದಗಳನ್ನು ನೆನಪಿಟ್ಟುಕೊಳ್ಳುತ್ತಾರೆ ಎಂಬುದನ್ನು ಈ ಅಭ್ಯಾಸದ ಮೂಲಕ ನಾವು ಗಮನಿಸಿದೆವು. ಈ ಸಾಲುಗಳು ಅವರಿಗೆ ನೆನಪಿಟ್ಟುಕೊಳ್ಳಲು ಮತ್ತು ತಮ್ಮ ಧ್ವನಿಶಾಸ್ತ್ರದ ಅರಿವನ್ನು ಅಭಿವೃದ್ಧಿಪಡಿಸಲು ಸಹಾಯ ಮಾಡುತ್ತವೆ.

**ಧನಾತ್ಮಕ ಫಲಿತಾಂಶಗಳು**

ಸಂಗೀತ ಮತ್ತು ಕವಿತೆಯು ವಿಚಾರಗಳಿಗೆ ಪ್ರೇರಣೆ ನೀಡುತ್ತದೆ ಮತ್ತು ಮಕ್ಕಳ ಕಲ್ಪನೆಗಳನ್ನು ಪ್ರಚೋದಿಸುತ್ತದೆ. ತರಗತಿಯಲ್ಲಿ ಕಲಿತ ಕವಿತೆಗಳು ಮತ್ತು ಹಾಡುಗಳಿಂದ ಪ್ರೇರಣೆ ಪಡೆದು ಮಕ್ಕಳು ಕವಿತೆಗಳನ್ನು ಬರೆದಾಗ ಅಥವಾ ಕಲೆಯನ್ನು ಸೃಷ್ಟಿಸಿದಾಗ ನಾವು ಅಭಿಮಾನದಿಂದ ಹಿಗ್ಗುತ್ತೇವೆ. ತರಗತಿಯಲ್ಲಿ ಕಲಿಸಿದ ಕವಿತೆಯಿಂದ ಪ್ರೇರಣೆಗೊಂಡು ಏಳನೇ ತರಗತಿಯ ಇಬ್ಬರು

ವಿದ್ಯಾರ್ಥಿಗಳು ತಮ್ಮದೇ ಆದ ಕವಿತೆಯನ್ನು ಬರೆದರು (ಚಿತ್ರ 2). ಹೀಗೆ, ಸಂಗೀತ ಮತ್ತು ಪ್ರಾಸ ಪದ್ಯಗಳು ಮಾಂತ್ರಿಕ ಶಕ್ತಿಯನ್ನು ಹೊಂದಿದ್ದು, ಇವು ಮಕ್ಕಳನ್ನು ಭಿನ್ನ ಹಾಗೂ ಉನ್ನತ ಕ್ರಮಾಂಕದ ಮಾನಸಿಕ ತಾಣಕ್ಕೆ ಕೊಂಡೊಯ್ಯುತ್ತದೆ ಎಂಬುದು ಈ ಮೂಲಕ ಸಾಬೀತಾಗಿದೆ. ಇಲ್ಲದಿದ್ದರೆ ಇದು ಸಾಧ್ಯವಾಗುತ್ತಿರಲಿಲ್ಲ.

ಚಿತ್ರ 2. ಏಳನೇ ತರಗತಿಯ ಇಬ್ಬರು ವಿದಾರ್ಥಿಗಳು ಬರೆದ ಕವಿತೆ

ಸಂಗೀತವು ಎಳೆ ಮನಸ್ಸುಗಳ ಕಲ್ಪನಾ ಶಕ್ತಿಯನ್ನು ಪ್ರಚೋದಿಸುತ್ತದೆ ಮಾತ್ರವಲ್ಲದೆ ಸೃಜನಶೀಲ ಬರವಣಿಗೆಗೆ ಚೌಕಟ್ಟನ್ನು ಒದಗಿಸುತ್ತದೆ. ನಮ್ಮ ಎಳೆಯ ಮಕ್ಕಳು ತಮ್ಮದೇ ಆದ ಕಿರು ಕವಿತೆಗಳನ್ನು ಬರೆಯುತ್ತಾರೆ. ಹೀಗೆ, ಸಂಗೀತವನ್ನು ಸೃಜನಶೀಲ ಬರವಣಿಗೆಯೊಂದಿಗೆ ಸಂಯೋಜಿಸುವ ಕೆಲಸವು, ಮಕ್ಕಳ ಕಲ್ಪನಾಶಕ್ತಿಯನ್ನು ಪೋಷಿಸಲು ಮತ್ತು ಅವರನ್ನು ಸೃಜನಶೀಲ ಬರವಣಿಗೆಯಲ್ಲಿ ತೊಡಗಿಸಲು ಇರುವ ಪರಿಣಾಮಕಾರಿ ಮತ್ತು ಆನಂದಮಯ ವಿಧಾನವಾಗಿದೆ. ಉದಾಹರಣೆಗೆ, 'It's a Beautiful Day...' ಎಂಬ ಕವಿತೆಯಿಂದ ಪ್ರೇರಣೆ ಪಡೆದು, ಮೂರನೇ ತರಗತಿಯ ನಮ್ಮ ಒಬ್ಬ ವಿದ್ಯಾರ್ಥಿನಿಯೊಬ್ಬಳು ತನ್ನದೇ ಆದ ಕವಿತೆಯನ್ನು ರಚಿಸಿದಳು (ಚಿತ್ರ 3).

ಸಂಗೀತವು ಭಾಷಾ ತರಗತಿಯ ಅವಿಭಾಜ್ಯ ಅಂಗವಾಗಿದೆ ಎಂಬುದನ್ನು ನಾವು ಕಂಡುಕೊಂಡಿದ್ದೇವೆ. ಮಕ್ಕಳು ಭಾಷೆಯ ಕುರಿತು ಆತ್ಮವಿಶ್ವಾಸವನ್ನು ಬೆಳೆಸಿಕೊಂಡಾಗ ಅದನ್ನು ಚೆನ್ನಾಗಿ ಕಲಿಯುತ್ತಾರೆ. ಸಂಗೀತವು ನಮ್ಮ ಮಕ್ಕಳಲ್ಲಿ ಅತ್ಮವಿಶ್ವಾಸವನ್ನು ರೂಪಿಸಲು ಸಹಾಯ ಮಾಡುತ್ತದೆ. ರೋಸೆನ್ ಬ್ಲಾಟ್ ಹೇಳಿರುವಂತೆ, ಭಾಷೆಯು ಸೌಂದರ್ಯ ಮೀಮಾಂಸೆ ಮತ್ತು ಬಹಿರ್ವಾಹಿ ಅಂಶಗಳೆರಡನ್ನೂ ಹೊಂದಿದೆ. ಸಂಗೀತವು ಸೌಂದರ್ಯ ಮೀಮಾಂಸೆಯ ಅಂಶವನ್ನು ಉದ್ಧರಿಸುತ್ತದೆ ಹಾಗೂ ಹಾಡಿನ ಪದಗಳ ಭಾಷೆಯ ಮೂಲಕ ಸಂಪರ್ಕವನ್ನು ರೂಪಿಸಲು ಮಕ್ಕಳಿಗೆ ಸಹಾಯ ಮಾಡುತ್ತದೆ. ಸಂಗೀತವು ಕೆಲವೊಂದು ಪದಗಳನ್ನು ಅವರ ಸಕ್ರಿಯ ಶಬ್ದ ಭಂಡಾರದ ಅಂಗವಾಗಿಸುತ್ತದೆ: ಉದಾಹರಣೆಗೆ, ನಮ್ಮ ವಿದ್ಯಾರ್ಥಿಗಳು ಈಗ ತಮ್ಮ ದೈನಂದಿನ ಬದುಕಿನಲ್ಲಿ ಕವಿತೆಯ ಕೆಲವು ಪದಗಳನ್ನು ಬಳಸಲು ಆರಂಭಿಸಿದ್ದಾರೆ. ನಮ್ಮ ಮಕ್ಕಳು ಯಾವುದೇ ಭಾಷೆಯನ್ನು ಪರಿಣಾಮಕಾರಿಯಾಗಿ ಕಲಿಯಬೇಕೆಂದು ನಾವು ಇಚ್ಛಿಸಿದರೆ, ಅವರು ತಮ್ಮ ಶಬ್ದ ಭಂಡಾರವನ್ನು ರೂಪಿಸಲು ಮತ್ತು ಗ್ರಹಿಕೆಯಲ್ಲಿ ನಿರರ್ಗಳತೆಯನ್ನು ಸಾಧಿಸಲು ನಾವು ಅವರಿಗೆ ಸಹಾಯ ಮಾಡಬೇಕು. ಮೂರನೇ ಭಾಷೆಯಾಗಿರುವ ಇಂಗ್ಲಿಷ್ ನ ವಿಚಾರದಲ್ಲಿ ಹೇಳುವುದಾದರೆ, ತರಗತಿಯ ದೈನಂದಿನ ಚಟುವಟಿಕೆಯಾಗಿ ಪ್ರಾಸ ಪದ್ಯಗಳನ್ನು ಪರಿಚಯಿಸುವ ಮೂಲಕ ಈ ಅಗತ್ಯ ಗುರಿಯನ್ನು ಸಾಧಿಸಬಹುದು.

ಚಿತ್ರ 3. ಮೂರನೇ ತರಗತಿಯ ವಿದ್ಯಾರ್ಥಿಯು ರಚಿಸಿರುವ ಕವಿತೆ

ದೀಪಿಕಾ ಝಾಲಾ ಅವರು ಸಿರೋಹಿಯ ಅಜೀಂ ಪ್ರೇಮ್ ಜಿ ಶಾಲೆಯಲ್ಲಿ ಶಿಕ್ಷಕಿಯಾಗಿದ್ದಾರೆ. ಅವರು 10 ವರ್ಷಗಳಷ್ಟು ಬೋಧನಾ ಮತ್ತು ಸಂಶೋಧನಾ ಅನುಭವವನ್ನು ಹೊಂದಿದ್ದಾರೆ. ಈ ಹಿಂದೆ ರಾಜಸ್ಥಾನದ ವಿವಿಧ ಕಾಲೇಜುಗಳು ಮತ್ತು ಶಾಲೆಗಳಲ್ಲಿ ಅವರು ಕೆಲಸ ಮಾಡಿದ್ದಾರೆ. ಸಂಗೀತವನ್ನು ಆಲಿಸುವುದು, ಅಡುಗೆ ಮಾಡುವುದು ಮತ್ತು ಬೋಧನೆ ಇತ್ಯಾದಿಗಳು ಅವರ ಹವ್ಯಾಸಗಳಾಗಿವೆ. ಅವರನ್ನು deepika.jhala@azimpremjifoundation.org ಮೂಲಕ ಸಂಪರ್ಕಿಸಬಹುದು.